ಆರ್. ವೆಂಕಟೇಶಮೂರ್ತಿ *

# ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು : ಒಂದು ಶೋಧ

ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು, ಪ್ರಾಚೀನ ಸ್ಮಾರಕಗಳನ್ನು ಹೊಂದಿ ಈಗಾಗಲೇ ಪ್ರಾಮುಖ್ಯತೆಯನ್ನು ಪಡೆದಿದೆ. ಈ ತಾಲ್ಲೂಕಿನ ಶಾಸನಗಳ ಪುನರ್ ಪರಿಶೀಲನೆಗೆಂದು ಕ್ಷೇತ್ರಕಾರ್ಯ ಕೈಗೊಂಡಾಗ[1] ಕಲ್ಲು ಗೋರಿಗಳು ಮತ್ತು ನಿಲುವುಗಲ್ಲುಗಳುಳ್ಳ ಪ್ರಾಗೈತಿಹಾಸಿಕ ನೆಲೆಗಳು ಪತ್ತೆಯಾದವು.

## ಕಲ್ಲುಗೋರಿಗಳು

ಅರಸೀಕೆರೆ ತಾಲ್ಲೂಕಿಗೆ ಸೇರಿದ ತಳಲೂರು ಗ್ರಾಮವು ಚನ್ನರಾಯಪಟ್ಟಣ ರಸ್ತೆಯಲ್ಲಿ ೬ ಕಿ.ಮೀ. ದೂರದಲ್ಲಿದೆ. ಗ್ರಾಮದ ಆರಂಭದಲ್ಲಿಯೇ ವಾಸವಾಗಿರುವ ಶ್ರೀಯುತ ಈಶ್ವರಪ್ಪನವರ ಮನೆಯ ಪಕ್ಕದಲ್ಲಿ ಅವರದೇ ಆದ ಜಮೀನಿನಲ್ಲಿ ಮಣ್ಣನ್ನು ಅಗೆಯುವಾಗ ಕೆಂಪು ಮತ್ತು ಕಪ್ಪು ಬಣ್ಣದ ಮಡಕೆ ಚೂರುಗಳು ದೊರೆತಿದ್ದ (ಇದೇ ಸಂದರ್ಭದಲ್ಲಿ ಉತ್ತಮ ಸ್ಥಿತಿಯಲ್ಲಿರುವ ೭೭ ಸೆಂ. ಮೀ. ಉದ್ದ ಮತ್ತು ೩೧ ಸೆಂ. ಮೀ. ಅಗಲವುಳ್ಳ ಮಹಿಷ ಮರ್ದಿನಿ ಶಿಲ್ಪವೂ ದೊರೆತಿದೆ) ವಿಷಯ ತಿಳಿದು, ಸ್ಥಳ ಪರಿಶೀಲನೆ ಮಾಡಿದಾಗ ಸಣ್ಣ ಸಣ್ಣ ಕೆಂಪು, ಕಪ್ಪು ಮಡಕೆ ಚೂರುಗಳು ಕಂಡುಬಂದವು. ಈ ಸೂಚನೆಯ ಮೇರೆಗೆ ವಿಚಾರಿಸಲಾಗಿ ಈ ಸ್ಥಳದಿಂದ ಅರ್ಧ ಕಿ.ಮೀ. ದೂರದಲ್ಲಿ ಈಗ ಗುರುತಿಸಲಾಗಿರುವ ಬೃಹತ್ ಶಿಲಾಯುಗದ ನಿವೇಶನ ಪತ್ತೆಯಾಯಿತು.

ಈ ನಿವೇಶನದ ಮಾಲೀಕರಾದ ಶ್ರೀಯುತ ಜಗನ್ನಾಥ್‌ರವರು ಇದೇ ಗ್ರಾಮದ ನಿವಾಸಿ. ಇವರು ತಮ್ಮ ತೋಟಕ್ಕೆ ಇಲ್ಲಿಂದ ಮಣ್ಣನ್ನು ಹೊಡೆಸುವಾಗ ಪೂರ್ಣ ಆಕಾರದಲ್ಲಿದ್ದ ಹಿಡಿಯಿರುವ ಮಡಕೆ, ಅಗಲ ಬಾಯಿರುವ ಮಡಕೆಗಳು, ಕಬ್ಬಿಣದ ಆಯುಧಗಳು ಮತ್ತು ಒರಳುಕಲ್ಲು ಮುಂತಾದ ವಸ್ತುಗಳು ದೊರೆತವಂತೆ. ತುಕ್ಕು ಹಿಡಿದಿದ್ದ ಕಬ್ಬಿಣದ ಆಯುಧವೊಂದನ್ನು ತಮ್ಮ ನೇಗಿಲಿಗೆ 'ಗುಳ' (ತುಕ್ಕನ್ನು ತೆಗೆದು ಮೂಲ ರೂಪವನ್ನು ಕೆಡಿಸಲಾಗಿದೆ)ವನ್ನಾಗಿ ಮಾಡಿಕೊಂಡಿದ್ದಾರೆ. ದೊರೆತ ವಸ್ತುಗಳ ಪ್ರಾಮುಖ್ಯತೆಯ ಅರಿವಿಲ್ಲದೆ ಇದ್ದುದರಿಂದ ಅವುಗಳೆಲ್ಲವನ್ನೂ ಎಸೆಯಲಾಗಿ ಅವುಗಳು ದನ ಕಾಯುವ ಹುಡುಗರಿಂದ ನಾಶವಾಗಿದೆ ಎಂದು ಶ್ರೀಯುತರಿಂದ ತಿಳಿಯಿತು.



ಹುಳಿಯಾರು ರಸ್ತೆಯಲ್ಲಿ ಬೊಮ್ಮನಹಳ್ಳಿ ಬಳಿ ಹೊಲವೊಂದರಲ್ಲಿರುವ ನಿಲುವುಗಲ್ಲು

* 'ನವಸುಮ' ನಂ. ೨೭/೧, ೩೩ನೇ ಮುಖ್ಯರಸ್ತೆ, ೫೦ ಅಡಿ ರಸ್ತೆ, ಮುನೇಶ್ವರ ಬ್ಲಾಕ್, ಬೆಂಗಳೂರು-೫೬೦ ೦೮೫.

1 ಈ ಕ್ಷೇತ್ರಕಾರ್ಯಕ್ಕೆ ಅವಕಾಶ ಕಲ್ಪಿಸಿಕೊಟ್ಟ ಶ್ರೀಮತಿ ಕೆ. ವಸಂತಲಕ್ಷ್ಮಿಯವರಿಗೆ ಮತ್ತು ಕ್ಷೇತ್ರ ಕಾರ್ಯದುದ್ದಕ್ಕೂ ನಮ್ಮೊಡನೆ ಸಹಕರಿಸಿದ ತಳಲೂರಿನ ಶ್ರೀ ಸದಾಶಿವಯ್ಯ, ಚರಿತ್ರೆ ಉಪನ್ಯಾಸಕರು, ಇವರಿಗೆ ನನ್ನ ಕೃತಜ್ಞತೆಗಳು.

ಈ ಸಂದರ್ಭದಲ್ಲಿ ಗೋರಿಗಳಿಗೆ ಉಪಯೋಗಿಸಿದ್ದ ಕಲ್ಲು ಚಪ್ಪಡಿಗಳನ್ನು ಟ್ರ್ಯಾಕ್ಟರ್‌ನಲ್ಲಿ ಸುಮಾರು ೩-೪ ಬಾರಿ ಭರ್ತಿಯಾಗಿ ಸಾಗಿಸಿ ಸುಮಾರು ೨ ಕಿ.ಮೀ. ದೂರದಲ್ಲಿರುವ ಕಾಲುವೆಗೆ ಅಕ್ಕ ಪಕ್ಕದ ಗೋಡೆ ಮತ್ತು ಸೇತುವೆಯನ್ನು ಕಟ್ಟಲು ಉಪಯೋಗಿಸಿಕೊಳ್ಳಲಾಗಿದೆ. ಇದಕ್ಕಾಗಿ ಸುಮಾರು ೧೦-೧೫ ಸಮಾಧಿಗಳು ನಾಶವಾಗಿರುವ ಸಾಧ್ಯತೆಗಳಿವೆ. ಅಗೆದಿರುವ ಮಣ್ಣು ಗೋಡೆ ಎಂದರೆ ಸುಮಾರು ೧೨೫ ರಿಂದ ೧೩೦ ಅಡಿಗಳಷ್ಟು ಉದ್ದ, ಸುಮಾರು ೮೦ ಅಡಿಗಳಷ್ಟು ಅಗಲ ಹಾಗೂ ೪½-೫ ಅಡಿಗಳಷ್ಟು ಆಳವಾಗಿರುವ ಇಲ್ಲಿ ಮಡಕೆ-ಆಕಾರದ ಗುರುತುಗಳು, ಮಡಕೆ ಚೂರುಗಳು ಹಾಗೂ ಮೂಳೆಗಳು ಅಂಟಿಕೊಂಡಿರುವುದು ಕಂಡುಬರುತ್ತದೆ.

ಈ ನಿವೇಶನದಲ್ಲಿ ಸಧ್ಯಕ್ಕೆ ಗೋಚರಿಸುವುದು ಕೇವಲ ಮೂರು ಸಮಾಧಿಗಳು ಮಾತ್ರ. ಇವು ಸುಮಾರು ೧½-೨ ಅಡಿಗಳಷ್ಟು ಹೊರಗೆ ಕಾಣುತ್ತಿದ್ದು ಉಳಿದ ಭಾಗ ಮಣ್ಣಿನಲ್ಲಿ ಸೇರಿಕೊಂಡಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ವಸ್ತುಗಳೆಂದರೆ : ೧) ಕೆಂಪು-ಕಪ್ಪು ಬಣ್ಣದ ಮಡಕೆ ಚೂರುಗಳು, ೨) ಉಗುರಿನಿಂದ ಚಿತ್ತಾರ ಮಾಡಿರುವ ಕೆಂಪು ಮಡಕೆ ಚೂರು, ೩) ಸಣ್ಣ ಬಾಯಿ ಇರುವ ಪುಟ್ಟದಾದ ಕುಡಿಕೆ, ೪) ಬೂದಿ ಅಂಟಿಕೊಂಡಿರುವ ಮಧ್ಯಮ ದಪ್ಪದ ಕೆಂಪು ಬಣ್ಣದ ಮಡಕೆಯ ಕಾಲು ಭಾಗ, ೫) ಒರಳು ಕಲ್ಲಿನಲ್ಲಿ ವಸ್ತುಗಳನ್ನು ಕುಟ್ಟುವ ಅಥವಾ ಅರೆಯುವ ಕಲ್ಲು,[2] ೬) ಪ್ರಾಯಶಃ ಮಡಕೆಯ ಮೇಲ್ಭಾಗವನ್ನು ನುಣುಪುಗೊಳಿಸಲು ಉಪಯೋಗಿಸುತ್ತಿದ್ದರೆಂದು ಭಾವಿಸಬಹುದಾದ ಒಂದು ನುಣುಪು ಕಲ್ಲು.

ಪ್ರಾಚ್ಯ ವಸ್ತು ಇಲಾಖೆಯವರಿಂದ ಮತ್ತು ಅನೇಕ ವಿದ್ವಾಂಸರುಗಳಿಂದ ಈಗಾಗಲೇ ಶೋಧಗೊಂಡಿರುವ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಕಂಡು ಬಂದಿರುವಂಥ ಕಲ್ಲು ಗೋರಿಗಳು ಮತ್ತು ವಸ್ತುಗಳು ದೊರಕಿರುವುದರಿಂದ ಈ ತಳಲೂರಿನ ಸಮಾಧಿಗಳನ್ನು ಸುಮಾರು ಕ್ರಿ.ಪೂ. ೫೦೦ರ ಕಾಲವೆಂದು ಪರಿಗಣಿಸಬಹುದಾಗಿದೆ.

ಈ ನಿವೇಶನದ ಆಸುಪಾಸಿನ ಸುಮಾರು ೧-೧½



ತಳಲೂರಿನ ಬೃಹತ್ ಶಿಲಾಯುಗದ ನೆಲೆ

ಕಿ.ಮೀ. ಸುತ್ತಳತೆಯಲ್ಲಿ ಉತ್ಖನನ ನಡೆಸಿದರೆ ಮಣ್ಣಿನಿಂದ ಆವೃತಗೊಂಡಿರಬಹುದಾದ ಕಲ್ಲು ಗೋರಿಗಳು ಕಂಡುಬರುವ ಸಾಧ್ಯತೆಗಳಿವೆ.

## ನಿಲುವುಗಲ್ಲುಗಳು

ಈ ತಾಲ್ಲೂಕಿನಲ್ಲಿ ಕಲ್ಲುಗೋರಿಗಳಲ್ಲದೆ, ನಿಲುವುಗಲ್ಲುಗಳೂ ಸಹ ಗೋಚರಿಸಿವೆ. ಒಟ್ಟು ೧೦ ನಿಲುವುಗಲ್ಲುಗಳು ಕಣ್ಗೋಚರವಿದ್ದು, ಅರಸೀಕೆರೆ, ಹುಳಿಯಾರು ರಸ್ತೆಯಲ್ಲಿ ಬೊಮ್ಮೇನಹಳ್ಳಿಯಿಂದ ಹಿಂದಕ್ಕೆ ೩ ಕಿ.ಮೀ. ಕಲ್ಲಿನ ಬಳಿ ಹೊಲವೊಂದರಲ್ಲಿ ಸುಮಾರು ಎಂಟು ನಿಲುವುಗಲ್ಲುಗಳಿವೆ. ಇವುಗಳಲ್ಲಿ ನಾಲ್ಕು ಮುರಿದಿದ್ದು ಉಳಿದ ಮೂರು, ೪ ರಿಂದ ೫ ಅಡಿಗಳಷ್ಟು ಎತ್ತರವನ್ನು ಹೊಂದಿವೆ. ಆದರೆ ಒಂದು ನಿಲುವುಗಲ್ಲು ತುದಿಯಲ್ಲಿನ ಸ್ವಲ್ಪ ಭಾಗದ ಮುರಿಕೆಯೊಂದಿಗೆ ಭೂಭಾಗದ ಮೇಲ್ಮಟ್ಟದಿಂದ ಸುಮಾರು ೨೧ ಅಡಿ ಉದ್ದ, ೫ ಅಡಿ ೮ ಅಂಗುಲ ಅಗಲವನ್ನು ಹೊಂದಿದೆ. ಇದರ ದಪ್ಪ ಸುಮಾರು ೧½ ಅಡಿಯಿಂದ ಆರಂಭವಾಗಿ ತುದಿಯಲ್ಲಿ ½ ಅಡಿಯಷ್ಟಿದೆ. ಅಂತೆಯೇ ಮಾಲೆಕಲ್‌ತಿರುಪತಿ ಮಾರ್ಗದಲ್ಲಿರುವ ಎರಡು ನಿಲುವುಗಲ್ಲುಗಳು ಸುಮಾರು ೪-೫ ಅಡಿಗಳಷ್ಟು ಎತ್ತರದ್ದಾಗಿವೆ.

ಸುತ್ತಲೂ ಬೆಟ್ಟಗುಡ್ಡಗಳು ಹಾಗೂ ಜಲವಸತಿಯನ್ನು ಹೊಂದಿರುವ ಅರಸೀಕೆರೆ ಪ್ರದೇಶವನ್ನು, ಶೋಧಗೊಂಡಿರುವ ಹೆಚ್ಚಿನ ಸಂಖ್ಯೆಯ ಕಲ್ಲುಗೋರಿಗಳು ಮತ್ತು ನಿಲುವುಗಲ್ಲುಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಪ್ರದೇಶವು ಹಿಂದೆ ಬೃಹತ್ ಶಿಲಾಯುಗದ ಜನರ ಶಾಶ್ವತ ನೆಲೆಯಾಗಿತ್ತು ಎಂದು ಊಹಿಸಬಹುದಾಗಿದೆ. ○

2 ಇಂತಹುದೇ ವಸ್ತುಗಳು ಕಣ್ಣೂರು ಮತ್ತು ಒಡಿಗೇನಹಳ್ಳಿ ನಿವೇಶನಗಳಲ್ಲಿಯೂ ದೊರೆತಿವೆ.